## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1004 (1216) |
| ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 07.03.2022 |
| ಉತ್ತರಿಸುವವರು | : | ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಆನೆಗಳ ಹಾವಳಿ ತಡೆಗಟ್ಟಲು ರೈಲ್ವೆ ಕಂಬಿ ಬ್ಯಾರಿಕೇಡ್ ನಿರ್ಮಾಣ ಯೋಜನೆ ಜಾರಿಗೆ ತರಲಾಗಿದೆಯೇ; | ಹೌದು.<br><br>ಕಾಡಂಚಿನ ಗ್ರಾಮಗಳಿಗೆ ಉಪಯೋಗಿಸಿದ ರೈಲ್ವೆ ಹಳಿಗಳನ್ನು ಬಳಸಿಕೊಂಡು ರೈಲ್ ಬ್ಯಾರಿಕೇಡ್ ಗಳನ್ನು ನಿರ್ಮಿಸಿ ಅಳವಡಿಸುವುದರ ಮೂಲಕ ಕಾಡಾನೆ ಮತ್ತು ಮಾನವ-ಪ್ರಾಣಿಗಳ ಸಂಘರ್ಷ, ಬೆಳೆನಾಶ ಹಾಗೂ ವನ್ಯಪ್ರಾಣಿಗಳ ಪ್ರವೇಶ ತಡೆಗಟ್ಟುವ ಮತ್ತು ರೈತರಿಗೆ ದೀರ್ಘಕಾಲದವರೆಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ, |
| ಆ) | ಸದರಿ ಯೋಜನೆಯ ರೂಪುರೇಷೆಗಳೇನು; ಹಾಗು ಸದರಿ ಯೋಜನೆಯ ಅಂದಾಜು ಮೊತ್ತವೆಷ್ಟು; | 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ "ಉಪಯೋಗಿಸಿದ ರೈಲುಹಳಿ ತಡೆಗೋಡೆಯಿಂದ ಮಾನವ-ಆನೆ ಸಂಘರ್ಷ ನಿಯಂತ್ರಣ" ಎಂಬ ಹೊಸ ಕಾರ್ಯಕ್ರಮ/ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಅದರಂತೆ ರಾಜ್ಯದಲ್ಲಿ ಮಾನವ-ಆನೆ ಸಂಘರ್ಷ ನಿಯಂತ್ರಣಕ್ಕಾಗಿ "ಉಪಯೋಗಿಸಿದ ರೈಲುಹಳಿಗಳನ್ನು ಉಪಯೋಗಿಸಿ 517.50 ಕಿ.ಮೀ. ರೈಲ್ವೆಹಳಿ ತಡೆಗೋಡೆಯನ್ನು ಅಂದಾಜು ರೂ.621.00 ಕೋಟಿ ಅನುದಾನದಲ್ಲಿ ಮುಂದಿನ 3 ವರ್ಷಗಳಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿರುತ್ತದೆ. |
| ಇ) | ಇದುವರೆವಿಗೂ ಎಷ್ಟು ಕಿ.ಮೀ. ವಿಸ್ತೀರ್ಣದ ಬ್ಯಾರಿಕೇಡ್ ನ್ನು ಎಲ್ಲೆಲ್ಲಿ ನಿರ್ಮಾಣ ಮಾಡಲಾಗಿದೆ; ಇದಕ್ಕೆ ಬಿಡುಗಡೆಗೊಳಿಸಲಾದ ಮೊತ್ತವೆಷ್ಟು; (ವಿವರ ನೀಡುವುದು) | ರಾಜ್ಯದಲ್ಲಿ 2015-16ನೇ ಸಾಲಿನಿಂದ 2020-21ನೇ ಸಾಲಿನವರೆಗೆ 181.802 ಕಿ.ಮೀ. ರೈಲ್ವೆ ಬ್ಯಾರಿಕೇಡ್ ನ್ನು ನಿರ್ಮಾಣ ಮಾಡಲಾಗಿದೆ.<br><br>2019-20ನೇ ಸಾಲಿನಿಂದ ರೈಲ್ವೆ ಬ್ಯಾರಿಕೇಡ್ ನಿರ್ಮಾಣಕ್ಕಾಗಿ ಪ್ರತ್ಯೇಕ ಲೆಕ್ಕಶೀರ್ಷಿಕೆ 4406-01-101-0-01-ಉಪಯೋಗಿತ ರೈಲ್ವೆ ಹಳಿಗಳ ಬ್ಯಾರಿಕೇಡ್ ನಿರ್ಮಾಣದಿಂದ ಮಾನವ-ವನ್ಯ ಪ್ರಾಣಿ ಸಂಘರ್ಷ ನಿಯಂತ್ರಣ-132-ಬಂಡವಾಳ ವೆಚ್ಚಗಳು ಇದರಡಿ ಬಿಡುಗಡೆ ಮಾಡಿದ ಅನುದಾನದ ವಿವರ ಈ ಕೆಳಗಿನಂತಿದೆ. |

......2

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|

| ವರ್ಷ | ಬಿಡುಗಡೆ ಮಾಡಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|
| 2019-20 | 5,000.00 |
| 2020-21 | 5,000.00 |
| 2021-22 | 5,000.00 |
| ಒಟ್ಟು | 15,000.00 |

ರಾಜ್ಯದಲ್ಲಿ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಮಾಡಿರುವ ವಿವರ.

| ಕ್ರ. ಸಂ. | ವಿಭಾಗ | ಪರಿಮಾಣ (ಕಿ.ಮೀಗಳಲ್ಲಿ) |
|---|---|---|
| 1 | ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ | 54.808 |
| 2 | ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ | 50.73 |
| 3 | ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ | 30.677 |
| 4 | ಕಾವೇರಿ ವನ್ಯಜೀವಿ ವಿಭಾಗ | 14.05 |
| 5 | ಮಲೈ ಮಹದೇಶ್ವರ ವನ್ಯಜೀವಿ ವಿಭಾಗ | 13.25 |
| 6 | ಮಡಿಕೇರಿ ಪ್ರಾದೇಶಿಕ ವಿಭಾಗ | 9.516 |
| 7 | ಹಾಸನ ಪ್ರಾದೇಶಿಕ ವಿಭಾಗ | 4.521 |
| 8 | ರಾಮನಗರ ಪ್ರಾದೇಶಿಕ ವಿಭಾಗ | 4.250 |
| ಒಟ್ಟು | | 181.802 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಈ) | ಬಂಡೀಪುರ ಅರಣ್ಯ ವ್ಯಾಪ್ತಿಯ ಮಳೂರು ವಲಯ ಪ್ರದೇಶದ ಮಳೂರಿನಿಂದ ಸೀಗೆವಾಡಿಯವರೆಗೆ ಬಾಕಿ ಇರುವ ಬ್ಯಾರಿಕೇಡ್ ನಿರ್ಮಾಣ ಕಾರ್ಯವನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? | ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶದ ಮೊಳೆಯೂರು ವನ್ಯಜೀವಿ ವಲಯದ ವ್ಯಾಪ್ತಿಯಲ್ಲಿ ಮೊಳೆಯೂರಿನಿಂದ ಸೀಗೆವಾಡಿವರೆಗೆ ಒಟ್ಟು 4 ಕಿ.ಮೀ ರೈಲ್ವೆ ಬ್ಯಾರಿಕೇಡ್ ನಿರ್ಮಾಣ ಕಾಮಗಾರಿ ಕೈಗೊಳ್ಳಲು ಉದ್ದೇಶಿಸಿದ್ದು, 2022-23ನೇ ಸಾಲಿನಲ್ಲಿ ಅನುದಾನದ ಲಭ್ಯತೆಯ ಆಧಾರದ ಮೇಲೆ ಕೈಗೊಳ್ಳಲಾಗುವುದು. |

ಸಂಖ್ಯೆ: ಅಪಜೀ 12 ಎಫ್‌ಟಿಎಸ್ 2022

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು